## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2293

ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿಗೌಡ

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 26.03.2021

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ವ್ಯಾಪ್ತಿಯ ಗ್ರಾಮೀಣ ಭಾಗದಲ್ಲಿ ಸಮರ್ಪಕವಾಗಿ ಬಸ್ ಸಂಚಾರ ವ್ಯವಸ್ಥೆಯಿಲ್ಲದೆ ಸಾರ್ವಜನಿಕರು, ವಿದ್ಯಾರ್ಥಿಗಳು, ಕೂಲಿ-ಕಾರ್ಮಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ವ್ಯಾಪ್ತಿಯಲ್ಲಿ 368 ಗ್ರಾಮಗಳಿದ್ದು, ಇವುಗಳ ಪೈಕಿ 332 ಗ್ರಾಮಗಳಿಗೆ ಸಾರಿಗೆ ಸೌಲಭ್ಯ ಕಲ್ಪಿಸಲಾಗಿರುತ್ತದೆ. ಉಳಿದ 36 ಗ್ರಾಮಗಳ ಪೈಕಿ 30 ಗ್ರಾಮಗಳು ಭಾರಿ ವಾಹನ ಸಂಚಾರಕ್ಕೆ ಯೋಗ್ಯ ರಸ್ತೆ ಇಲ್ಲದ ಗ್ರಾಮಗಳಾಗಿದ್ದು, ಇನ್ನುಳಿದ 6 ಗ್ರಾಮಗಳು ಕೇವಲ ದಾಖಲೆ ಗ್ರಾಮಗಳಾಗಿರುತ್ತವೆ. ಆದುದರಿಂದ ಸದರಿ ಗ್ರಾಮಗಳಿಗೆ ಸಾರಿಗೆ ಸೌಲಭ್ಯ ಕಲ್ಪಿಸಲು ಸಾಧ್ಯವಾಗಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಈ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವುದು ಯಾವಾಗ; (ವಿವರ ನೀಡುವುದು) | |
| ಇ) | ನಾಗಮಂಗಲ ತಾಲ್ಲೂಕಿನ ಗ್ರಾಮೀಣ ಭಾಗಗಳಿಗೆ ಹೊಸದಾಗಿ ಬಸ್ ಸಂಚಾರ ವ್ಯವಸ್ಥೆಗೆ ಯಾವಾಗ ಕ್ರಮ ಕೈಗೊಳ್ಳಲಾಗುವುದು; (ಹೊಸದಾಗಿ ಬಸ್ ಸಂಚಾರ ಪ್ರಾರಂಭ ಮಾಡುವ ಸಮಯ ಹಾಗೂ ಮಾರ್ಗದ ವಿವರ ನೀಡುವುದು) | ಪ್ರಸ್ತುತ ಬೇಡಿಕೆ ಇರುವ ಹೆಚ್.ಭುವನಹಳ್ಳಿ ಗ್ರಾಮಕ್ಕೆ ಹೊಸದಾಗಿ ನಾಗಮಂಗಲ ಘಟಕದ ವತಿಯಿಂದ ಅನುಸೂಚಿ ಸಂಖ್ಯೆ 13/57ರಲ್ಲಿ ನಾಗಮಂಗಲದಿಂದ ಹೆಚ್.ಭುವನಹಳ್ಳಿಗೆ ಸಮಯ 8:00, 17:25 ಕ್ಕೆ ಹಾಗೂ ಹೆಚ್.ಭುವನಹಳ್ಳಿಯಿಂದ ನಾಗಮಂಗಲಕ್ಕೆ ಬೆಳಿಗ್ಗೆ 9:20 ಹಾಗೂ 18:45ಕ್ಕೆ ದಿನಾಂಕ: 29.03.2021ರಿಂದ ಜಾರಿಗೆ ಬರುವಂತೆ ಸಾರಿಗೆ ಸೌಲಭ್ಯ ಕಲ್ಪಿಸಲಾಗುವುದು. |
| ಈ) | ನಾಗಮಂಗಲ-ಮೈಸೂರು ಮುಖ್ಯರಸ್ತೆಯಲ್ಲಿ ದಿನನಿತ್ಯ ಓಡಾಡುವ ಸಾರಿಗೆ ಬಸ್‌ಗಳನ್ನು ಹೊನ್ನಬೆಟ್ಟದ ಹೊಸೂರು, ಮಡಿಕೆ ಹೊಸೂರು-ಕುಲ್ಲದೇವನಹಳ್ಳಿ ಗೇಟ್ ಬಳಿ ನಿಲುಗಡೆ ನೀಡಲಾಗುತ್ತಿದೆಯೇ; | ಹೊನ್ನಬೆಟ್ಟದ ಹೊಸೂರು, ಮಡಿಕೆ ಹೊಸೂರು-ಕುಲ್ಲದೇವನಹಳ್ಳಿ ಗೇಟ್ ಸ್ಥಳವು ವಿಸ್ಡಂ ಶಾಲೆ/ಆಯುಷ್ ಸಂಶೋಧನಾ ಕೇಂದ್ರದಿಂದ 50 ಮೀಟರ್ ಅಂತರದಲ್ಲಿದ್ದು, ಮಂಡ್ಯ ವಿಭಾಗದ ವತಿಯಿಂದ ನಾಗಮಂಗಲ-ಮೈಸೂರು ಮಾರ್ಗದಲ್ಲಿ ಆಚರಣೆಯಾಗುತ್ತಿರುವ ಸಾರಿಗೆಗಳಲ್ಲಿ ಆಯುಷ್ ಸಂಶೋಧನಾ ಕೇಂದ್ರದ ಬಳಿ ನಿಲುಗಡೆ ನೀಡಲಾಗುತ್ತಿದೆ. |
| ಉ) | ಇಲ್ಲದಿದ್ದಲ್ಲಿ, ಈ ಪ್ರದೇಶದಲ್ಲಿ ನೂತನವಾಗಿ ಕೇಂದ್ರ ಸರ್ಕಾರದ ಆಯುಷ್ ಸಂಶೋಧನ ಕೇಂದ್ರದಲ್ಲಿ ಕಾರ್ಯ ನಿರ್ವಹಿಸುವ ಮತ್ತು ಸುತ್ತಮುತ್ತಲ ಗ್ರಾಮಗಳ ಜನರಿಗೆ ದಿನನಿತ್ಯ ತಾಲ್ಲೂಕು ಕೇಂದ್ರ ಮತ್ತು ಮೈಸೂರಿಗೆ ಓಡಾಡಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | |
| ಊ) | ಬಂದಿದ್ದಲ್ಲಿ, ಸದರಿ ಸ್ಥಳದಲ್ಲಿ ಬಸ್ ನಿಲುಗಡೆಯನ್ನು ಎಂದಿನಿಂದ ಪ್ರಾರಂಭ ಮಾಡಲಾಗುವುದು? (ವಿವರ ನೀಡುವುದು) | |

ಸಂಖ್ಯೆ: ಟಿಡಿ 168 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು